**OFFICE OF THE PRL. CIVIL JUDGE & JMFC, GAURIBIDANUR, 561208**

**No. M.T.No.190/2016, dtd: 15.03.2016**

It is hereby notified to the General pubic that the following unclaimed 12 vehicles are in the custody of Gauribidanur TPS which are seized under the C.Mis 1/2015 and PF No. 94/11, 99/11, 133/2015.

| Sl. No | PF No | C.R & C Mis No. | Vehicle Number | Type of Vehicle | Engine Number | Chassis No |
|---|---|---|---|---|---|---|
| 1 | 133/15 | 01/15 | AP-05-AB-0006 | TVS FIERO | M1106F083047 | M1106F083047 |
| 2 | 133/15 | 01/15 | AP-02-N-2366 | Hero Honda Passion Plus | 06B08M36020 | 06B09C45280 |
| 3 | 133/15 | 01/15 | KA-40-E-8207 | Suzuki Samurai | 9908M437128 | 9908F387632 |
| 4 | 133/15 | 01/15 | KA-06-S-7718 | MAX-100 | N6301M502022 | 1301F446155 |
| 5 | 133/15 | 01/15 | - | TVS Heavy Duty | OD1BC1838370 | MD621BD16C2 BO1780 |
| 6 | 133/15 | 01/15 | MH-12-BU-7422 | Hero Honda Passion Plus | 03C21M15595 | 03C21C03250 |
| 7 | 133/15 | 01/15 | KA-03-Q-7975 | Samurai | 7510M600719 | 7510F557141 |
| 8 | 133/15 | 01/15 | KA-06-X-5380 | Discover | DXEBNE26722 | MD2DSDXZZN AE26120 |
| 9 | 133/15 | 01/15 | - | TVS Victor GX | OF1B51359210 | MD625AF7752 B87020 |
| 10 | 133/15 | 01/15 | - | Suzuki | F479232406 | MB8NE4BCD88 153250 |
| 11 | 94/11 | 270/11 | KA-09-2515 | Yamaha | - | - |
| 12 | 99/11 | 295/11 | CAP-9408 | IND Suzuki | - | - |

**P.R.263**

**SANDEEP PATIL**
PRL. CIVIL JUDGE & JMFC,
Gauribidanur-

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ.ಸಾರಿಇ 02 ಸಾಇನಿ 2016, ಬೆಂಗಳೂರು, ದಿನಾಂಕ: 05–03–2016.**

ಕರ್ನಾಟಕ ಮೋಟಾರು ವಾಹನ ತೆರಿಗೆ ಅಧಿನಿಯಮ, 1957 (ಕರ್ನಾಟಕ ಅಧಿನಿಯಮ 35/1957) ಕಲಂ 16(1) ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾತಾ ಅಮೃತಾನಂದಮಯಿ ಮಠ, ಬೆಂಗಳೂರು, ಇವರಿಗೆ ಸಾರ್ವಜನಿಕ ಹಿತಾಸಕ್ತಿ ಮತ್ತು ಸೇವಾ ಚಟುವಟಿಕೆಗಳ ಹಿನ್ನೆಲೆಯಲ್ಲಿ ದಿ: 12–03–2016 ರಿಂದ 15–03–2016 ರವರೆಗೆ ಬೆಂಗಳೂರು, ದಿ: 16–03–2016 ರಂದು ಬೆಂಗಳೂರಿನಿಂದ ಬಾಗೇಪಲ್ಲಿ ಮೂಲಕ ಹೈದರಾಬಾದ್‌ಗೆ ಹೋಗಲು ಹಾಗೂ ದಿ: 20–03–2016 ರಂದು ಹೈದ್ರಾಬಾದ್‌ನಿಂದ ಕರ್ನಾಟಕದ ಹುಮ್ನಾಬಾದ್ ತನಿಖಾ ಠಾಣೆಯ ಮೂಲಕ ಮಹಾರಾಷ್ಟ್ರದ ಪುಣೆಗೆ ಹೋಗಲು ಈ ಸಂಸ್ಥೆಯು ಹೊಂದಿರುವ ಕೆಳಕಂಡ ವಾಹನಗಳಿಗೆ ಒಟ್ಟು ₹. 1,22,988/–ಗಳ ಮೋಟಾರು ವಾಹನ ಪ್ರವೇಶ ತೆರಿಗೆ ಪಾವತಿಯಿಂದ ವಿನಾಯಿತಿ ನೀಡಲಾಗಿದೆ.

| ಕ್ರ.ಸಂ | ವಾಹನಗಳ ಸಂಖ್ಯೆ | ವಾಹನ ವರ್ಗ | ಆಸನ ಸಾಮರ್ಥ್ಯ |
|---|---|---|---|
| 1 | KL-07-AV-1260 | ಲೇ ಲ್ಯಾಂಡ್ ಬಸ್ | 36 SEATS |
| 2 | KL-07-BP-6608 | ಲೇ ಲ್ಯಾಂಡ್ ಬಸ್ | 52 SEATS |
| 3 | KL-07-BP-7811 | ಲೇ ಲ್ಯಾಂಡ್ ಬಸ್ | 52 SEATS |
| 4 | KL-07-BP-7842 | ಲೇ ಲ್ಯಾಂಡ್ ಬಸ್ | 52 SEATS |
| 5 | KL-07-BP-9673 | ಲೇ ಲ್ಯಾಂಡ್ ಬಸ್ | 52 SEATS |
| 6 | KL-07-BY-7819 | ಲೇ ಲ್ಯಾಂಡ್ ಬಸ್ | 51 SEATS |
| 7 | KL-07-BY-7842 | ಲೇ ಲ್ಯಾಂಡ್ ಬಸ್ | 51 SEATS |
| 8 | KL-07-BY-7944 | ಲೇ ಲ್ಯಾಂಡ್ ಬಸ್ | 51 SEATS |
| 9 | KL-07-CE-8215 | ಲೇ ಲ್ಯಾಂಡ್ ಬಸ್ | 52 SEATS |
| 10 | KL-07-CE-9801 | ಲೇ ಲ್ಯಾಂಡ್ ಬಸ್ | 52 SEATS |
| 11 | KL-07-CF-1375 | ಲೇ ಲ್ಯಾಂಡ್ ಬಸ್ | 52 SEATS |

ಸದರಿ ಸಂಸ್ಥೆಯ ನೋಂದಾಯಿತ ವಾಹನಗಳ ತೆರಿಗೆ ವಿನಾಯಿತಿಯು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1. ವಾಹನದ ಮಾಲೀಕತ್ವ ಬದಲಾವಣೆಯಾದಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.
2. ಯಾವ ಉದ್ದೇಶಕ್ಕಾಗಿ ತೆರಿಗೆ ವಿನಾಯಿತಿ ನೀಡಲಾಗಿದೆಯೋ ಆ ಉದ್ದೇಶ ಬದಲಾದಲ್ಲಿ ತೆರಿಗೆ ವಿನಾಯಿತಿಯು ರದ್ದುಗೊಳ್ಳುತ್ತದೆ.

**P.R.264**
**SC. 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಬೀರೇಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಮುಖ್ಯ ಇಂಜಿನಿಯರ್‌ರವರ ಕಛೇರಿ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಗ್ರಾಮೀಣಾಭಿವೃದ್ಧಿ ಭವನ, ಆನಂದರಾವ್ ವೃತ್ತ, ಬೆಂಗಳೂರು.

**ವಿಷಯ :** ಶ್ರೀ ದೊಡ್ಡರಂಗಯ್ಯ, ಪ್ರರೂಪಕರು, ಪಂ.ರಾ.ಇಂ. ಉಪ ವಿಭಾಗ, ಹಿರಿಯೂರು ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂ: ಗ್ರಾ ಅಪ: 467–ಜಿಪಅ: 2015, ದಿನಾಂಕ: 31–10–2015.
2. ಸರ್ಕಾರದ ಸುತ್ತೋಲೆ ಸಂ:ಸಿಆಸುಇ: 9ಸೇಇವಿ: 95, ದಿನಾಂಕ: 26–06–1996.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಸರ್ಕಾರದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ರವರು ಕೋರಿರುವಂತೆ ಶ್ರೀ ದೊಡ್ಡರಂಗಯ್ಯ, ಪ್ರರೂಪಕರು ಇವರನ್ನು ಸೇವೆಯಿಂದ ವಜಾಗೊಳಿಸುವ ಕುರಿತಾದ ಪ್ರಸ್ತಾವನೆಯ ಬಗ್ಗೆ ಕೂಡಲೇ ಅಗತ್ಯ ಕ್ರಮ ಕೈಗೊಂಡು, ಕೈಗೊಂಡ ಕ್ರಮದ ಬಗ್ಗೆ ಸರ್ಕಾರಕ್ಕೆ ಹಾಗೂ ಲೋಕಾಯುಕ್ತ ಕಛೇರಿಗೆ ಮಾಹಿತಿ ಒದಗಿಸುವಂತೆ ಈ ಕಛೇರಿಗೆ ನಿರ್ದೇಶಿಸಲಾಗಿರುತ್ತದೆ.

ಶ್ರೀ ದೊಡ್ಡರಂಗಯ್ಯ, ಪ್ರರೂಪಕರು, ಪಂ.ರಾ.ಇಂ. ಉಪ ವಿಭಾಗ, ತುಮಕೂರು ಇವರು ಈ ಹಿಂದೆ ಪಂ.ರಾ.ಇಂ. ಉಪ ವಿಭಾಗ, ಹಿರಿಯೂರು ಇಲ್ಲಿ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ 2008–09ನೇ ಸಾಲಿನಲ್ಲಿ ರಾಷ್ಟ್ರೀಯ ಹೆದ್ದಾರಿ 4ರ ಅರಳಿಕಟ್ಟೆ, ಗೊಲ್ಲರಹಟ್ಟಿ ಮತ್ತು ಟಿ. ಚನ್ನಮ್ಮನಹಳ್ಳಿ ಹಿರಿಯೂರು ತಾಲ್ಲೂಕು ಲೆಕ್ಕ ಶೀರ್ಷಿಕೆ 5054ರ ಅಡಿಯಲ್ಲಿ ಅಂದಾಜು ₹.9.49 ಲಕ್ಷ ಮೊತ್ತಕ್ಕೆ ಮಂಜೂರಾಗಿರುವ ರಸ್ತೆ ಅಭಿವೃದ್ಧಿ ಕಾಮಗಾರಿಯ ಉಸ್ತುವಾರಿಯನ್ನು ಸರಿಯಾಗಿ ನಿರ್ವಹಿಸದೆ ಗುತ್ತಿಗೆದಾರರು ಅಪೂರ್ಣಗೊಳಿಸಿರುವ ಕಾಮಗಾರಿಗೆ ಪೂರ್ಣವಾದ ಬಿಲ್ಲನ್ನು ಪಾವತಿಸಿರುವುದರಿಂದ ಶ್ರೀ ಉಜ್ಜನಿ ಸಿದ್ದಪ್ಪ ಅರಳಿಕಟ್ಟೆ ಹಿರಿಯೂರು ತಾ॥ ಇವರು ಕಾಮಗಾರಿ ಬಗ್ಗೆ ತನಿಖಾಧಿಕಾರಿಗೆ ತನಿಖೆ ನಡೆಸುವಂತೆ ದೂರು ಸಲ್ಲಿಸಿರುತ್ತಾರೆ. ಅದರಂತೆ ಆರಕ್ಷಕ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಚಿತ್ರದುರ್ಗ ಇವರು ಜಿಲ್ಲಾ ಪ್ರಧಾನ ನ್ಯಾಯಾಲಯ ಚಿತ್ರದುರ್ಗ ಇಲ್ಲಿ ಭಾರತೀಯ ದಂಡ ಸಂಹಿತೆ 406 ಹಾಗೂ 1988ರ ಭ್ರಷ್ಟಾಚಾರ ವಿರೋಧ ಕಾಯ್ದೆ 13(1) (ಸಿ), 13 (1) (ಡಿ) (11) 13(2)ರ ಪ್ರಕಾರ ದೂರು ದಾಖಲಿಸಿದ್ದು ಘನ ನ್ಯಾಯಾಲಯವು ಸದರಿಯವರನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ಆರೋಪಿತರಿಗೆ ಭಾರತೀಯ ದಂಡ ಸಂಹಿತೆ 406 ರಡಿಯಲ್ಲಿ ನಾಲ್ಕು ವರ್ಷಗಳ ಕಠಿಣ ಸಜೆ ಹಾಗೂ ₹.10000=00 ಗಳ ದಂಡ ಹಾಗೂ ದಂಡ ಕಟ್ಟಲು ತಪ್ಪಿದ್ದಲ್ಲಿ ಆರು ತಿಂಗಳು ಸಾದಾ ಸಜೆ ಅನುಭವಿಸುವಂತೆಯೂ ಸಜಾ ಶಿಕ್ಷೆ ವಿಧಿಸಿರುತ್ತದೆ ಎಂದು ತಿಳಿಸಿ ತೀರ್ಪಿನ ಪ್ರತಿಯನ್ನು ಲಗತ್ತಿಸಿ ಕಳುಹಿಸಿರುತ್ತಾರೆ.

ಈ ಸಜೆಗಳ ಹಿನ್ನೆಲೆಯಲ್ಲಿ ಭಾರತೀಯ ಸಂವಿಧಾನ ಅನುಚ್ಛೇದ 311 (2)ರ ಪ್ರವರ್ಗ ಹಾಗೂ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಸಿ.ಸಿ.ಎ) ನಿಯಮ, 1957ರ ನಿಯಮ, 14 ಹಾಗೂ 10(2) ಮತ್ತು ಸರ್ಕಾರದ ಸುತ್ತೋಲೆ ಸಂ:ಸಿಆಸುಇ:9ಸೇಇವಿ: 95 ದಿ: 26–06–1996ರ ಪ್ರಕಾರ ಸೇವೆಯಿಂದ ವಜಾಗೊಳಿಸಲು ಸರ್ವೋಚ್ಛ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 770/2001 ತೀರ್ಪಿನತ್ತ ಸೆಳೆಯುತ್ತಾ ಆರೋಪಿತರಾದ ಆರೋಪಿ 4 ಶ್ರೀ ದೊಡ್ಡರಂಗಯ್ಯ, ಪ್ರರೂಪಕರು, ಪಂ.ರಾ.ಇಂ. ಉಪ ವಿಭಾಗ, ಹಿರಿಯೂರು ಚಿತ್ರದುರ್ಗ ಜಿಲ್ಲೆ ಇವರನ್ನು ಕೂಡಲೇ ಸೇವೆಯಿಂದ ವಜಾಗೊಳಿಸಲು ಅಪರ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿ: 09–10–2015 ರಂದು ಸರ್ಕಾರಕ್ಕೆ ವರದಿ ಮಾಡಿ ಕೋರಿರುತ್ತಾರೆ. ಅದರಂತೆ ಸರ್ಕಾರದ ಪತ್ರ ದಿ: 31–10–2015 ರಲ್ಲಿ ಈ ಇಲಾಖೆಯ ಗ್ರೂಪ್ ಬಿ, ಸಿ.ಡಿ ವೃಂದದ ನೇಮಕಾತಿ ಹಾಗೂ ಸಕ್ಷಮ ಪ್ರಾಧಿಕಾರಿ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಆಗಿದ್ದು ಇವರ ಹಂತದಲ್ಲಿಯೇ ಗ್ರೂಪ್–ಸಿ ದರ್ಜೆಯ ನೌಕರರಾದ ಶ್ರೀ ದೊಡ್ಡರಂಗಯ್ಯ, ಪ್ರರೂಪಕರು, ಇವರನ್ನು ಸೇವೆಯಿಂದ ವಜಾಗೊಳಿಸಲು ಈ ಕಛೇರಿಗೆ ನಿರ್ದೇಶಿಸಲಾಗಿದ್ದು, ಅದರಂತೆ ಈ ಆದೇಶ.

**ಆದೇಶ ಸಂ: ಮುಇಂ/ಪಂರಾಇಂಇ/ಸಿ–11/82/2015, ದಿನಾಂಕ 28ನೇ ಡಿಸೆಂಬರ್ 2015.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಗ್ರೂಪ್–ಸಿ ದರ್ಜೆಯ ನೌಕರರಾದ ಶ್ರೀ ದೊಡ್ಡರಂಗಯ್ಯ, ಪ್ರರೂಪಕರು, ಪಂ.ರಾ.ಇಂ. ಉಪ ವಿಭಾಗ, ಹಿರಿಯೂರು (ಪ್ರಸ್ತುತ ಪಂ.ರಾ.ಇಂ. ಉಪ ವಿಭಾಗ, ತುಮಕೂರು) ಇವರ ವಿರುದ್ಧ ಅಪೂರ್ಣ ಕಾಮಗಾರಿಯ ಕೆಲಸಗಳಿಗೆ ಪೂರ್ಣ ಹಣ ಸಂದಾಯ ಮಾಡಿರುವ ಸಂಬಂಧದ ಪ್ರಕರಣದಲ್ಲಿ ಜಿಲ್ಲಾ ಪ್ರಧಾನ ನ್ಯಾಯಾಲಯ, ಚಿತ್ರದುರ್ಗ ವಿಶೇಷ ಪ್ರಕರಣದ ಸಂ: (ಪಿ.ಸಿ.ಎ.) 2/2012 ದಿ: 14–07–2015 ರಲ್ಲಿ ನಾಲ್ಕು ವರ್ಷ ಕಠಿಣ ಶಿಕ್ಷೆ ಮತ್ತು ₹.10000=00 ಗಳ ದಂಡ ಹಾಗೂ ದಂಡ ಕಟ್ಟಲು ತಪ್ಪಿದ್ದಲ್ಲಿ ಆರು ತಿಂಗಳ ಸಾದಾ ಶಿಕ್ಷೆ ವಿಧಿಸಿದ್ದು ಇವರನ್ನು ಸೇವೆಯಿಂದ ವಜಾಗೊಳಿಸಲು ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತರು ಮಾಡಿರುವ ಶಿಫಾರಸ್ಸಿನಂತೆ ಹಾಗೂ ಸರ್ಕಾರದ ನಿರ್ದೇಶನದಂತೆ ಶ್ರೀ ಬಿ. ಗುರುಪ್ರಸಾದ್, ಮುಖ್ಯ ಇಂಜಿನಿಯರ್‌ರಾದ ನಾನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಸಿ.ಸಿ.ಎ) ನಿಯಮ 1957 ರ ನಿಯಮ 9(c) ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ. ದೊಡ್ಡರಂಗಯ್ಯ, ಪ್ರರೂಪಕರು

ಇವರನ್ನು ಭಾರತೀಯ ಸಂವಿಧಾನ ಅನುಚ್ಛೇಧ 311 (2)ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ (ಸಿ.ಸಿ.ಎ) ನಿಯಮ, 1957ರ ನಿಯಮ 14 (1)ರ ಜೊತೆಗೆ ಓದಿಕೊಂಡಂತೆ ಇದೇ ನಿಯಮಾವಳಿಗಳ ನಿಯಮ, 8(VIII) ರಂತೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

**ಬಿ. ಗುರುಪ್ರಸಾದ್**
ಮುಖ್ಯ ಇಂಜಿನಿಯರ್
ಪಂಚಾಯತ್‌ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು

P.R. 265

## ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ದಾವಣಗೆರೆ ಇವರ ಕಛೇರಿ ನಡಾವಳಿ

**ಉಪಸ್ಥಿತರು:** ಹೆಚ್.ಜೆ. ತೆಂಬದ್
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೋಂದಣಿ ಪ್ರಾಧಿಕಾರ, ದಾವಣೆಗೆರೆ.

**ವಿಷಯ :** ವಾಹನ ಸಂಖ್ಯೆ KA-17/4077 (PSV) ರ ನೋಂದಣಿಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ :**
1) ಮಾಲೀಕರ ಅರ್ಜಿ ದಿನಾಂಕ: 06–01–2016
2) ಮೋಟಾರು ವಾಹನ ನಿರೀಕ್ಷಕರ ವರದಿ, ದಿನಾಂಕ 01–03–2016.

**ಪ್ರಸ್ತಾವನೆ:**

ವಾಹನ ಸಂಖ್ಯೆ: KA-17/4077 (PSV) ರ ಮಾಲೀಕರಾದ The Principal JJM Medical College Educational Institution Davanagere. ರವರು ಮೇಲ್ಕಂಡ ವಾಹನವು ದುಸ್ಥಿತಿಯಲ್ಲಿರುವುದಾಗಿ ತಿಳಿಸಿ ಸದರಿ ವಾಹನದ ನೋಂದಣಿ ರದ್ದತಿಗೆ ದಿನಾಂಕ 06–01–2016 ರಂದು ಮನವಿ ಮಾಡಿರುತ್ತಾರೆ. ವಾಹನವು 1994ರ ಮಾದರಿಯದಾಗಿದ್ದು ರಸ್ತೆಯಲ್ಲಿ ಓಡಿಸಲು ಯೋಗ್ಯವಾಗಿರುವುದಿಲ್ಲದಿರುವುದರಿಂದ ವಾಹನದ ನೋಂದಣಿಯನ್ನು ರದ್ದುಪಡಿಸಬಹುದಾಗಿ ಹಿರಿಯ ಮೋಟಾರು ವಾಹನ ನಿರೀಕ್ಷಕರು ದಿನಾಂಕ: 01–03–2016ರ ವರದಿಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ವಾಹನ ಸಂಖ್ಯೆ: KA-17/4077 (PSV)ರ ನೋಂದಣಿಯನ್ನು ರದ್ದುಪಡಿಸಲು ನಿರ್ಣಯಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**–: ಆದೇಶ :–**

**ಆದೇಶ ಸಂಖ್ಯೆ: ಪ್ರಾ.ಸಾ.ಅ/ದಾವ/ನೋ/ KA-17/4077/2015–16, ದಿನಾಂಕ–03–03–2016.**

ಹೆಚ್.ಜೆ. ತೆಂಬದ್ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ ದಾವಣಗೆರೆ ಆದ ನಾನು ನನಗೆ 1988ರ ಕೇಂದ್ರ ಮೋಟಾರು ವಾಹನ ಕಾಯ್ದೆ ಕಲಂ 55(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಕಾರಣಗಳಿಂದಾಗಿ ಮೋ/ವಾ/ಸಂಖ್ಯೆ KA-17/4077 (PSV)ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಹಾಗೂ ಇಲಾಖಾ ಶಾಸನ ಕ್ರಮದ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಪಡಿಸುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನ ಸಂಖ್ಯೆ | KA-17/4077 |
| 2 | ವಾಹನದ ನೋಂದಣಿ ದಿನಾಂಕ | 16-06-1994 |
| 3 | ವಾಹನದ ತಯಾರಕನ ಹೆಸರು | Tata |
| 4 | ವಾಹನದ ವರ್ಗ | PSV |
| 5 | ವಾಹನ ತಯಾರಿಕೆ ವರ್ಷ | 1994 |
| 6 | ಚಾಸಿಸ್ ಸಂಖ್ಯೆ | 379035J93701712 |
| 7 | ಯಂತ್ರ ಸಂಖ್ಯೆ | 497D22J93714445 |
| 8 | ತೆರಿಗೆ ಅವಧಿ | 31-05-2016 |
| 9 | ವಾಹನ ಮಾಲೀಕರ ಹೆಸರು ಮತ್ತು ವಿಳಾಸ | The Principal JJM Medical College Educational Institution Davangere. |

**ಹೆಚ್.ಜೆ. ತೆಂಬದ್,**
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ
ನೋಂದಣಿ ಪ್ರಾಧಿಕಾರ, ದಾವಣಗೆರೆ.

P.R. 266

## ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು, ಉತ್ತರವಲಯ–04, ಯಲಹಂಕ, ಬೆಂಗಳೂರು–64

## ಬೆಂಗಳೂರು ಉತ್ತರ ಜಿಲ್ಲೆ.

### ಅಧಿಸೂಚನೆ

**ಸಂಖ್ಯೆ: ಆ1/ ಹೈ.ಕ.ಮೀ/1/15–16 ದಿನಾಂಕ: 07–01–2016.**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ರಡಿಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೆಂಗಳೂರು ಉತ್ತರ ವಲಯ–3 ರವರ ವೃಂದ ನಿಯಂತ್ರಣ ಪ್ರಾಧಿಕಾರದ ವ್ಯಾಪ್ತಿಯ ಗ್ರೂಪ್–ಸಿ ವೃಂದದ ಹುದ್ದೆಗಳನ್ನು ಗುರುತಿಸಿ ಹೈದ್ರಾಬಾದ್–ಕರ್ನಾಟಕ ವೃಂದದ ವ್ಯಾಪ್ತಿಯ ಗ್ರೂಪ್–ಸಿ ವೃಂದದ ಹುದ್ದೆಗಳನ್ನು ಮೀಸಲಿರಿಸುವ ಕುರಿತು.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ ಟಿಎಲ್ಎಕ್ಸ 2012 ದಿ:06–11–2013.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 43 ಹೆಚ್‌ಕೆಸಿ 2013 ದಿ:29–01–2014.

ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ 2013ರ ಅಧಿಸೂಚನೆಯನ್ವಯ ಹಾಗೂ ಉಲ್ಲೇಖ–2ರ ಸರ್ಕಾರದ ಅಧಿಸೂಚನೆ–1ರನ್ವಯ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ರ ನಿಯಮ3 (2)(ಬಿ) ರನ್ವಯ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೆಂಗಳೂರು ಉತ್ತರ ವಲಯ–4ರವರ ವೃಂದ ನಿಯಂತ್ರಣ ಪ್ರಾಧಿಕಾರದ ವ್ಯಾಪ್ತಿಯ ಗುಂಪು–ಸಿ ವೃಂದದ ಹುದ್ದೆಗಳಿಗೆ ಪ್ರತಿಶತ 8%ರಷ್ಟು ಹುದ್ದೆಗಳನ್ನು ಹೈದ್ರಾಬಾದ್–ಕರ್ನಾಟಕ ವೃಂದಕ್ಕೆ ಮೀಸಲಿರಿಸಲು ಅವಕಾಶ ಕಲ್ಪಿಸಲಾಗಿದೆ.

ಅದರಂತೆ ಬೆಂಗಳೂರು ಉತ್ತರ ವಲಯ–4ರ ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿ ರವರ ವೃಂದ ನಿಯಂತ್ರಣ ವ್ಯಾಪ್ತಿಗೆ ಒಳಪಡುವ ಗುಂಪು–ಸಿ ವೃಂದದ ಹುದ್ದೆಗಳಾದ **ಸರ್ಕಾರಿ ಪ್ರಾಥಮಿಕ ಶಾಲಾ ಸಹ ಶಿಕ್ಷಕರು, ಹಾಗೂ ಸಮನಾಂತರ ವೃಂದದ ಹುದ್ದೆಗಳನ್ನು ಗುರುತಿಸಿ, ಅನುಬಂಧದಲ್ಲಿ ತೋರಿಸಿದಂತೆ ಪ್ರಾದೇಶಿಕ ಸ್ಥಳೀಯ ವೃಂದಕ್ಕೆ ಮೀಸಲಿರಿಸಿ ಆದೇಶಿಸಿದೆ.**

ಈ ಆದೇಶದನ್ವಯ ಅನುಬಂಧದಲ್ಲಿ ತೋರಿಸಿದಂತೆ ಹೈದ್ರಾಬಾದ್–ಕರ್ನಾಟಕ ವೃಂದಕ್ಕೆ ಮೀಸಲಿರಿಸಿ, ಪ್ರಸ್ತುತ ಮಂಜೂರಾತಿ ಇರುವ ಹುದ್ದೆಗಳಿಗೆ ಸೀಮಿತಗೊಳಿಸಿ ಆದೇಶಿಸಿದೆ. ಭವಿಷ್ಯತ್ತಿನಲ್ಲಿ ಹುದ್ದೆಗಳ ಸೃಜನೆ ಹಾಗೂ ರದ್ದಾದ/ಮಾರ್ಪಾಡಾದ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

**ಶ್ರೀನಿವಾಸ.ಆರ್.**
ಕ್ಷೇತ್ರ ಶಿಕ್ಷಣಾಧಿಕಾರಿಗಳು,
ಬೆಂಗಳೂರು ಉತ್ತರ ವಲಯ–04

**ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು, ಉತ್ತರವಲಯ–04, ಯಲಹಂಕ, ಬೆಂಗಳೂರು–64**

**ಅನುಬಂಧ–1**

| ಕ್ರ ಸಂ | ಹುದ್ದೆಯ ಪದನಾಮ | ವೃಂದ | ನೇಮಕಾತಿ ಅನುಪಾತ | | ವೇತನ ಶ್ರೇಣಿ | ಮಂಜೂರಾದ ಹುದ್ದೆ | ಹೈದ್ರಾಬಾದ್ ಕರ್ನಾಟಕ ವೃಂದಕ್ಕೆ ಮೀಸಲಾತಿ ವೃಂದಕ್ಕೆ ಮೀಸಲಾತಿ (8%) | | |
|---|---|---|---|---|---|---|---|---|---|
| | | | ನೇರ ನೇಮಕಾತಿ | ಬಡ್ತಿ | | | ಒಟ್ಟು ಶೇಕಡ 8% | ನೇರ ನೇಮಕಾತಿ | ಬಡ್ತಿ |
| 1 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು – (ಕನ್ನಡ ಸಾಮಾನ್ಯ) | ಬೋಧಕ "ಸಿ" | 100% | 0 | 13600–26000 | 393 | 32 | 32 | 0 |
| 2 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ಉರ್ದು ಸಾಮಾನ್ಯ) | ಬೋಧಕ "ಸಿ" | 100% | 0 | 13600–26000 | 43 | 4 | 4 | 0 |
| 3 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ಆಂಗ್ಲ) | ಬೋಧಕ "ಸಿ" | 100% | 0 | 13600–26000 | 02 | 1 | 1 | 0 |
| 4 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ಹಿಂದಿ) | ಬೋಧಕ "ಸಿ" | 100% | 0 | 13600–26000 | 4 | 1 | 1 | 0 |
| 5 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ವಿಜ್ಞಾನ) | ಬೋಧಕ "ಸಿ" | 100% | 0 | 13600–26000 | 0 | 0 | 0 | 0 |
| 6 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ತೆಲುಗು) | ಬೋಧಕ "ಸಿ" | 100% | 0 | 13600–26000 | 8 | 1 | 1 | 0 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ ಸಂ | ಹುದ್ದೆಯ ಪದನಾಮ | ವೃಂದ | ನೇಮಕಾತಿ ಅನುಪಾತ | | ವೇತನ ಶ್ರೇಣಿ | ಮಂಜೂರಾದ ಹುದ್ದೆ | ಹೈದ್ರಾಬಾದ್ ಕರ್ನಾಟಕ ವೃಂದಕ್ಕೆ ಮೀಸಲಾತಿ ವೃಂದಕ್ಕೆ ಮೀಸಲಾತಿ (8%) | | |
|---|---|---|---|---|---|---|---|---|---|
| | | | ನೇರ ನೇಮಕಾತಿ | ಬಡ್ತಿ | | | ಒಟ್ಟು ಶೇಕಡ 8% | ನೇರ ನೇಮಕಾತಿ | ಬಡ್ತಿ |
| 7 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ತಮಿಳು) | ಬೋಧಕ "ಸಿ" | 100% | 0 | 13600–26000 | 0 | 0 | 0 | 0 |
| 8 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ಮರಾಠಿ) | ಬೋಧಕ "ಸಿ" | 100% | 0 | 13600–26000 | 0 | 0 | 0 | 0 |
| 9 | ಪ್ರಾಥಮಿಕ ಶಾಲಾ ವಿಶೇಷ ಶಿಕ್ಷಕರು –(ದೈಹಿಕ ಶಿಕ್ಷಣ ಶಿಕ್ಷಕರು) | ಬೋಧಕ "ಸಿ" | 100% | 0 | 13600–26000 | 26 | 3 | 3 | 0 |
| 10 | ಪ್ರಾಥಮಿಕ ಶಾಲಾ ಸಹ ಶಿಕ್ಷಕರು –(ಸಂಗೀತ ಶಿಕ್ಷಕರು) | ಬೋಧಕ "ಸಿ" | 100% | 0 | 13600–26000 | 1 | 0 | 0 | 0 |
| 11 | ಪ್ರಾಥಮಿಕ ಶಾಲಾ ವಿಶೇಷ ಶಿಕ್ಷಕರು –(ಚಿತ್ರಕಲಾ ಶಿಕ್ಷಕರು) | ಬೋಧಕ "ಸಿ" | 100% | 0 | 13600–26000 | 3 | 1 | 1 | 0 |
| | | | | | ಒಟ್ಟು | **480** | **43** | **43** | **0** |

**PR. 273**

ಕ್ಷೇತ್ರ ಶಿಕ್ಷಣಾಧಿಕಾರಿಗಳು,
ಬೆಂಗಳೂರು ಉತ್ತರ ವಲಯ–04

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59